ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಬಹು ಮಹಡಿ ಕಟ್ಟಡಗಳ ಮಾಲೀಕರ ಸಂಘಗಳ ಕುರಿತು

ಶ್ರೀ ಎನ್.ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) :-

225(239) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ ಮೂರು ವರ್ಷಗಳಲ್ಲಿ ಸಹಕಾರಿ ಕಾನೂನಿನ ಅನ್ವಯ ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಎಷ್ಟು ಬಹು ಮಹಡಿ ಕಟ್ಟಡಗಳ ಮಾಲೀಕರ ಸಂಘಗಳ ನೋಂದಣಿಯಾಗಿದೆ ; (ವಿಭಾಗವಾರು ಮಾಹಿತಿ ನೀಡುವುದು) (Flat owners Association)

(ಆ) ಬಹು ಮಹಡಿ ವಸತಿ ಕಟ್ಟಡಗಳ ಮಾಲೀಕರ ಸಂಘಗಳು ಸಹಕಾರಿ ಕಾಯ್ದೆಯ ಯಾವ ಕಲಂಗಳ ಅನ್ವಯ ನೋಂದಣಿಯಾಗಿದೆ ; (ಸದರಿ ಕಾನೂನಿನ ಕಲಂಗಳ ಪ್ರತಿಯನ್ನು ಒದಗಿಸುವುದು)

(ಇ) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಬಹು ಮಹಡಿ ವಸತಿ ಮಾಲೀಕರ ಸಂಘಗಳನ್ನು ಸಹಕಾರಿ ಕಾಯ್ದೆಯ ಅನ್ವಯ ನೋಂದಣಿ ಮಾಡಬಾರದೆಂದು ಆದೇಶ ನೀಡಿದೆಯೇ ; ಸದರಿ ನ್ಯಾಯಾಲಯದ ಆದೇಶದ ಪ್ರತಿಯನ್ನು ನೀಡುವುದು ;

(ಈ) ಮಾನ್ಯ ನ್ಯಾಯಾಲಯವು ಬಹು ಮಹಡಿ ವಸತಿ ಕಟ್ಟಡಗಳ ಮಾಲೀಕರ ಸಂಘಗಳನ್ನು ಸಹಕಾರಿ ಕಾಯ್ದೆಯ ಅನ್ವಯ ನೋಂದಣಿ ಮಾಡಬಾರದೆಂದು ಆದೇಶ ನೀಡಿದ್ದಲ್ಲಿ ಈಗಾಗಲೇ ನೋಂದಣಿಯಾಗಿರುವ ಬಹು ಮಹಡಿ ವಸತಿ ಕಟ್ಟಡಗಳ ಮಾಲೀಕರ ಸಂಘಗಳ ನೋಂದಣಿಯು ರದ್ದಾಗುವುದೇ ; ಈ ಕುರಿತು ಸರ್ಕಾರದ ನಿಲುವೇನು ?